## ಹಿಜಾಬ್ ಎಂದರೇನು?

ಹಿಜಾಬ್ ಎಂಬ ಶಬ್ದ ಮುಚ್ಚುವುದು, ಮರೆಮಾಚುವುದು ಎಂಬ ಅರ್ಥವಿರುವ 'ಹಜಬ' ಎಂಬ ಅರೇಬಿಕ್ ಶಬ್ದ-ದಿಂದ ಬಂದಿದೆ.

ಇಸ್ಲಾಮಿಕ್ ಪರಿಭಾಷೆಯಲ್ಲಿ ಹಿಜಾಬ್ ಎಂದರೆ ಪ್ರೌ-ಢಾವಸ್ಥೆಯನ್ನು ತಲುಪಿದ ಮುಸ್ಲಿಂ ಮಹಿಳೆ ಅಗತ್ಯವಾ-ಗಿ ಧರಿಸಬೇಕಾದ ವಸ್ತ್ರಧಾರಣೆ. ಮುಖ ಮತ್ತು ಕೈಗಳ-ನ್ನು ಬಿಟ್ಟು ಸಂಪೂರ್ಣ ದೇಹವನ್ನು ಮುಚ್ಚುವುದನ್ನು ಹಿಜಾಬ್ ಎಂದು ಹೇಳಲಾಗುತ್ತದೆ. ಕೆಲವು ಮಹಿಳೆ-ಯರು ಮುಖ ಮತ್ತು ಕೈಗಳನ್ನು ಸಹ ಮುಚ್ಚುತ್ತಾರೆ. ಇದನ್ನು ಬುರ್ಖಾ ಅಥವಾ ನಿಕಾಬ್ ಎಂದು ಕರೆಯ-ಲಾಗುತ್ತದೆ. ಮಹಿಳೆಯರು ಮಾತ್ರವಿರುವ ಮತ್ತು ನಿ-ರ್ದಿಷ್ಟ ಪುರುಷ ಸಂಬಂಧಿಗಳಿರುವ ಸ್ಥಳದಲ್ಲಿ ಹಿಜಾಬ್ ಧರಿಸಬೇಕಾದ ಅಗತ್ಯವಿಲ್ಲ. ವಾಸ್ತವದಲ್ಲಿ, ಹಿಜಾಬ್ ಬಾ-ಹ್ಯರೂಪಕ್ಕೆ ಮಾತ್ರ ಸೀಮಿತವಲ್ಲ. ಗೌರವಾರ್ಹ ಮಾತು,

ಸಭ್ಯತೆ ಮತ್ತು ಗಾಂಭೀರ್ಯಯುತ ವರ್ತನೆಯು ಸಹ ಹಿಜಾಬ್ ಆಗಿದೆ. ಸಜ್ಜನಿಕೆಯ ಈ ವರ್ತನೆಗಳು ಗಂಡ-ಸರಲ್ಲೂ ಇರಬೇಕಾಗಿದೆ.

> ಸಭ್ಯತೆ ಮತ್ತು ಘನತೆಯನ್ನು ಕಾಯ್ದುಕೊಳ್ಳಲು ಮುಸ್ಲಿಂ ಪುರುಷರು ಸಡಿಲು ಮತ್ತು ಪಾರದರ್ಶಕವಲ್ಲದ ಉಡುಪನ್ನು ಧರಿಸಬೇಕಾಗಿದೆ.

## ಹಿಜಾಬ್ ಆಜ್ಞಾಪಾಲನೆಯಾಗಿದೆ

ಹಿಜಾಬ್ ಧರಿಸುವುದರಿಂದ ಅನೇಕ ಪ್ರಯೋಜನಗಳಿದ್ದ-ರೂ ಸಹ, ಮೊತ್ತಮೊದಲನೆಯದಾಗಿ ಅದು ಅಲ್ಲಾಹನ ಆಜ್ಞೆಯಾಗಿದೆ. ಆದ್ದರಿಂದ ಹಿಜಾಬ್ ಧರಿಸುವುದು ವಿ-ಶ್ವಾಸದ ಒಂದು ಭಾಗ ಮತ್ತು ಸೃಷ್ಟಿಕರ್ತನಿಗೆ ತೋರಿಸುವ ವಿಧೇಯತೆಯಾಗಿದೆ.

> ಮಹಿಳೆಯರು ಪುರುಷರಿಗಿಂತ ಕೀಳೆಂದು ಹಿಜಾಬ್ ಯಾವುದೇ ವಿಧದಲ್ಲೂ ಸೂಚಿಸುವುದಿಲ್ಲ

“ಸತ್ಯವಿಶ್ವಾಸಿನಿಗಳಾದ ಮಹಿಳೆಯರೊಂದಿಗೆ (ಅವರು ಹೊರಹೋಗುವಾಗ ಅಥವಾ ಅನ್ಯಪುರುಷರ ಸಮ್ಮುಖದಲ್ಲಿರುವಾಗ) ತಮ್ಮ ಹೊರ ವಸ್ತ್ರಗಳನ್ನು ದೇಹದ ಸುತ್ತ ಹಾಕಿಕೊಳ್ಳಬೇಕೆಂದು ಹೇಳಿರಿ.” ಕುರ್‌ಆನ್ 33:59

ಸೃಷ್ಟಿಗಳಿಗೆ ಯಾವುದು ಒಳ್ಳೆಯದು ಯಾವುದು ಕೆಟ್ಟದು ಎಂದು ಪರಮ ಜ್ಞಾನಿಯಾದ ದೇವನಿಗೆ ಗೊತ್ತಿದೆ. ಅವನು ಮಾರ್ಗದರ್ಶನ ಒದಗಿಸುವುದು ಮನುಷ್ಯರ ಪ್ರಯೋಜನಕ್ಕಾಗಿ. ಸೃಷ್ಟಿಕರ್ತನಿಗೆ ವಿಧೇಯತೆ ತೋರುತ್ತಾ ಮಾಡುವ ಎಲ್ಲಾ ಕರ್ಮಗಳಂತೆ ಹಿಜಾಬ್ ಧರಿಸುವುದು ಕೂಡ ವಿಧೇಯತೆ ತೋರುವ ಒಂದು ಕರ್ಮವಾಗಿದೆ. ಅದು ಮಹಿಳೆಯನ್ನು ಸೃಷ್ಟಿಕರ್ತನಿಗೆ ಹತ್ತಿರಗೊಳಿಸುತ್ತದೆ ಮತ್ತು ಆಕೆಯಲ್ಲಿ ಸಂತೃಪ್ತಿ ಮತ್ತು ಸಮಾಧಾನವನ್ನು ಉಂಟುಮಾಡುತ್ತದೆ.

## ಹಿಜಾಬ್ ಸಭ್ಯತೆಯಾಗಿದೆ

ಇಸ್ಲಾಂ ಸಭ್ಯತೆ ಮತ್ತು ಶಿಷ್ಟತೆಯನ್ನು ಉತ್ತೇಜಿಸುತ್ತದೆ ಮತ್ತು ಸಮಾಜದಲ್ಲಿ ಅನೈತಿಕತೆಯನ್ನು ಕಡಿಮೆ ಮಾಡುತ್ತದೆ. ಇತರ ಅನೇಕ ಅಂಶಗಳೊಂದಿಗೆ ಹಿಜಾಬ್ ಕೂಡ ಈ ಗುರಿಯನ್ನು ಸಾಧಿಸಲು ಸಹಾಯ ಮಾಡುತ್ತದೆ.

“ಸತ್ಯವಿಶ್ವಾಸಿ ಪುರುಷರೊಂದಿಗೆ ಅವರು ತಮ್ಮ ದೃಷ್ಟಿಗಳನ್ನು ತಗ್ಗಿಸಬೇಕೆಂದು ಮತ್ತು ಸಭ್ಯತೆಯನ್ನು ಸಂರಕ್ಷಿಸಬೇಕೆಂದು ಹೇಳಿರಿ. ಇದು ಅವರಿಗೆ ಅತಿಪರಿಶುದ್ಧವಾಗಿದೆ. ಅವರು ಮಾಡುತ್ತಿರುವ ಎಲ್ಲವನ್ನೂ ಅಲ್ಲಾಹು ಸೂಕ್ಷ್ಮವಾಗಿ ಅರಿಯುತ್ತಿದ್ದಾನೆ. ಸತ್ಯವಿಶ್ವಾಸಿ ಮಹಿಳೆಯರೊಂದಿಗೆ ಅವರು ತಮ್ಮ ದೃಷ್ಟಿಗಳನ್ನು ತಗ್ಗಿಸಬೇಕೆಂದು ಮತ್ತು ಸಭ್ಯತೆಯನ್ನು ಸಂರಕ್ಷಿಸಬೇಕೆಂದು ಹೇಳಿರಿ. ಅವರು ಅವರ ಸೌಂದರ್ಯವನ್ನು -ಅದರಿಂದ ಪ್ರಕಟವಾಗುವುದರ ಹೊರತು ಇನ್ನೇನನ್ನೂ- ಪ್ರದರ್ಶಿಸಬಾರದು, ಅವರು ಅವರ ಎದೆಯ ಮೇಲೆ ಪರದೆಯನ್ನು

ಹಾಕಿಕೊಳ್ಳಬೇಕು.” ಕುರ್‌ಆನ್ 24:30-31

> ಇಸ್ಲಾಂ ಅಸಭ್ಯ ಉಡುಪು ಮತ್ತು ಅನೈತಿಕ ವರ್ತನೆಗಳ ಬಹಿರಂಗ ಪ್ರದರ್ಶನವನ್ನು ವಿರೋಧಿಸುವುದರ ಜೊತೆಗೆ, ಖಾಸಗಿಯಾಗಿ ದಂಪತಿಗಳ ಮಧ್ಯೆ ಪ್ರೀತಿ, ಮಮತೆ ಮತ್ತು ಆತ್ಮೀಯತೆ ಬೆಳೆಸಲು ಪ್ರೋತ್ಸಾಹಿಸುತ್ತದೆ.

ಮೇಲಿನ ವಚನಗಳಲ್ಲಿ ದೃಷ್ಟಿಗಳನ್ನು ತಗ್ಗಿಸಲು ಮತ್ತು ಸಭ್ಯತೆಯನ್ನು ಕಾಪಾಡಲು ಮೊತ್ತಮೊದಲು ಆಜ್ಞಾಪಿಸಲಾಗಿದ್ದು ಪುರುಷರಿಗೆ ಎಂಬುದು ಗಮನಾರ್ಹ. ಸಭ್ಯತೆಯ ಎಲ್ಲ ಹೊಣೆಗಾರಿಕೆಗಳನ್ನು ಮಹಿಳೆಯರೇ ಹೊರಬೇಕೆಂಬ ವಾದವನ್ನು ಇದು ಖಂಡಿಸುತ್ತದೆ.

## ಹಿಜಾಬ್ ರಕ್ಷಣೆಯಾಗಿದೆ

ಹಿಜಾಬ್‌ನ ನಿಜವಾದ ಉದ್ದೇಶ ಸಮಾಜದಲ್ಲಿ ಪುರುಷರು ಮತ್ತು ಮಹಿಳೆಯರಿಂದ ಸಂಭವಿಸುವ ಲೈಂಗಿಕ ಆಕರ್ಷಣೆ ಮತ್ತು ನೈತಿಕ ಅಧಃಪತನವನ್ನು ಸಾ-

ಧ್ಯವಾದಷ್ಟು ಕಡಿಮೆ ಮಾಡುವುದು. ಕುಟುಂಬ ಮತ್ತು ಸಮಾಜದಲ್ಲಿ ಸ್ಥಿರತೆಯನ್ನು ನೆಲೆಗೊಳಿಸುವ ಮೂಲಕ ಹಿಜಾಬ್ ಪುರುಷರು, ಮಹಿಳೆಯರು ಮತ್ತು ಸಮಾಜಗಳಿಗೆ ಅನೇಕ ವಿಧಗಳಲ್ಲಿ ಸಹಾಯ ಮಾಡುತ್ತದೆ.

- ✓ ಅನಗತ್ಯ ಅಭಿವೃದ್ಧಿಗಳಿಗೆ ತಡೆ ಹಾಕುತ್ತದೆ.
- ✓ ವಕ್ರ ನೋಟ ಮತ್ತು ಪೊಳ್ಳು ವಿಮರ್ಶೆಗಳಿಂದ ಮಹಿಳೆಯರನ್ನು ರಕ್ಷಿಸುತ್ತದೆ.
- ✓ ಮಹಿಳೆಯರ ವಿರುದ್ಧ ಲೈಂಗಿಕ ಆಕ್ರಮಣವುಂಟಾಗುವ ಸಾಧ್ಯತೆಯನ್ನು ಕಡಿಮೆ ಮಾಡುತ್ತದೆ.
- ✓ ರೂಪ ಲಾವಣ್ಯದ ಆಧಾರದಲ್ಲಿ ಮಹಿಳೆಯರನ್ನು ಲೈಂಗಿಕವಾಗಿ ಶೋಷಿಸುವುದಕ್ಕೆ ಕಡಿವಾಣ ಹಾಕುತ್ತದೆ.
- ✓ ಆಮಿಷಗಳಿಗೆ ಮತ್ತು ಹಾನಿಕಾರಕ ಆಸಕ್ತಿಗಳಿಗೆ ಕಡಿವಾಣ ಹಾಕುತ್ತದೆ.

## ಹಿಜಾಬ್ ಘನತೆಯಾಗಿದೆ

> ದೇವರ ದೃಷ್ಟಿಯಲ್ಲಿ ಗಂಡು ಮತ್ತು ಹೆಣ್ಣು ಸಮಾನರಾಗಲು ಅವರಿಬ್ಬರೂ ತದ್ರೂಪಿಗಳಾಗಬೇಕೆಂದಿಲ್ಲ. ಜೀವನದಲ್ಲಿ ಅವರಿಗೆ ವಹಿಸಿಕೊಡಲಾದ ಪಾತ್ರಗಳು ಮತ್ತು ಹೊಣೆಗಾರಿಕೆಗಳಲ್ಲಿ ಅವರ ಸಾಮ್ಯತೆಯು ಗೋಚರವಾಗುತ್ತದೆ.

ಹಿಜಾಬ್ ಮಹಿಳೆಯ ಹೆಣ್ತನವನ್ನು ಅದುಮುವ ಬದಲು ಉತ್ತೇಜಿಸುತ್ತದೆ. ಮಹಿಳೆಯನ್ನು ರೂಪ ಮುಂತಾದ ಪೊಳ್ಳು ಮಾನದಂಡಗಳ ಮೂಲಕ ಅಳೆಯುವುದನ್ನು ಬಿಟ್ಟು ಆಕೆಯ ಅಸ್ತಿತ್ವದಲ್ಲಿ ಆಕೆಗೆ ಘನತೆ ಮತ್ತು ಆತ್ಮಾಭಿಮಾನ ಉಂಟಾಗುವಂತೆ ಮಾಡುತ್ತದೆ. ಇದು ಮಹಿಳೆಯರಿಗೆ ಅವರ ಘನತೆಯನ್ನು ಪಾವಿತ್ರ್ಯತೆ, ವಿದ್ಯೆ, ಸಾಮಾಜಿಕ ಕೊಡುಗೆ ಮುಂತಾದ ಹೆಚ್ಚು ಅರ್ಥವತ್ತಾದ ಮಾನದಂಡಗಳ ಮೂಲಕ ರೂಪಿಸಲು ಸಹಾಯ ಮಾಡುತ್ತದೆಯಲ್ಲದೆ, ಅವರು ಹೇಗೆ ಕಾಣುತ್ತಾರೆ, ಎಷ್ಟು ಸಂ-

ಪಾದಿಸುತ್ತಾರೆ ಎಂದು ಭೌತಿಕ ಮಾಧ್ಯಮಗಳ ಮೂಲಕ ಗ್ರಾಹಕ ಸಮಾಜವು ಅವರ ಬೆಲೆಯನ್ನು ನಿಗದಿಪಡಿಸು-ವುದನ್ನು ತಡೆಗಟ್ಟುತ್ತದೆ.

ಯಮನ್ ಕ್ರಾಂತಿಯ ಮಾತೆ, ನೊಬೆಲ್ ಪಾರಿತೋಷಕ ವಿಜೇತೆ, **ತವಕ್ಕುಲ್ ಕರ್ಮಾನ್** ರೊಡನೆ ಕೆಲವು ಮಾ-ಧ್ಯಮಗಳು, ಇಷ್ಟೊಂದು ಬುದ್ಧಿಶಕ್ತಿ, ವಿದ್ಯೆ ಇರುವ ತಾವು ಹಿಜಾಬ್ ಧರಿಸುವುದು ತಮಗೆ ಹೇಗೆ ಒಗ್ಗಿಕೊಳ್ಳುತ್ತದೆ ಎಂದು ಪ್ರಶ್ನಿಸಿದಾಗ ಆಕೆ ನೀಡಿದ ಉತ್ತರ ಹೀಗಿತ್ತು:

“ಆದಿಕಾಲದಲ್ಲಿ ಮಾನವ ಸರಿಸುಮಾರು ನಗ್ನನಾಗಿದ್ದ. ಅವನ ಬುದ್ಧಿ ಬೆಳೆದಂತೆಯೇ ಆತ ಬಟ್ಟೆ ಉಡತೊಡ-ಗಿದ. ನಾನಿಂದು ಯಾವ ಸ್ಥಿತಿಯಲ್ಲಿದ್ದೇನೋ ಮತ್ತು ಏನನ್ನು ಧರಿಸಿದ್ದೇನೋ ಅದು ಮನುಷ್ಯ ಸಾಧಿಸಿದ ಚಿಂತನೆ ಮತ್ತು ನಾಗರಿಕತೆಯ ಉನ್ನತ ಮಟ್ಟವನ್ನು ಪ್ರ-ತಿಬಿಂಬಿಸುತ್ತದೆ. ಅದು ತಿರೋಗಾಮಿಯಲ್ಲ. ಬಟ್ಟೆಯನ್ನು ಕಳಚುವುದೇ ಆದಿಕಾಲಕ್ಕೆ ಹಿಂದಿರುಗುವ ತಿರೋಗಾಮಿ

ಸ್ಥಿತಿಯಾಗಿದೆ.”

## ಹಿಜಾಬ್ ಗೌರವವಾಗಿದೆ

ಇಂದು ಅನೇಕ ಸಮಾಜಗಳಲ್ಲಿ ಮಹಿಳೆಯರಿಗೆ ಅವರ ಸೌಂದರ್ಯವೇ ಅವರ ಮೌಲ್ಯವನ್ನು ನಿರ್ಧರಿಸುತ್ತದೆಯೆಂದು ಚಿಕ್ಕಂದಿನಲ್ಲೇ ಕಲಿಸಿಕೊಡಲಾಗುತ್ತದೆ. ಸಮಾಜದ ಕಾರಣರಹಿತವಾದ ಒತ್ತಡ ಮತ್ತು ನಿರೀಕ್ಷೆಗಳನ್ನು ಈಡೇರಿಸಿಕೊಡಲು ಸೌಂದರ್ಯದ ಮಿಥ್ಯ ಮತ್ತು ನಿಂದನೀಯ ಮಾನದಂಡಗಳನ್ನು ಹಿಂಬಾಲಿಸಲು ಮಹಿಳೆಯರು ನಿರ್ಬಂಧಿತರಾಗುತ್ತಾರೆ. ಬಾಹ್ಯ ಸೌಂದರ್ಯಕ್ಕೆ ಅತಿಯಾದ ಒತ್ತು ಕೊಡಲಾಗುವ ಇಂತಹ ಒಂದು ಪೊಳ್ಳು ವಾತಾವರಣದಲ್ಲಿ ವ್ಯಕ್ತಿಯ ಆಂತರಿಕ ಸೌಂದರ್ಯಕ್ಕೆ ಬೆಲೆ ಸಿಗುವುದು ಬಹಳ ಕಡಿಮೆ.

ಮಹಿಳೆಯನ್ನು ರೂಪ ಮತ್ತು ದೈಹಿಕ ಆಕೃತಿಯ ಆಧಾರದಲ್ಲಿ ಗೌರವಿಸುವ ಬದಲು ಸದ್ಗುಣ ಮತ್ತು ಸತ್ಕರ್ಮಗಳ

ಆಧಾರದಲ್ಲಿ ಗೌರವಿಸಬೇಕೆಂದು ಇಸ್ಲಾಂ ಕಲಿಸುತ್ತದೆ. ಸಮಾಜದಲ್ಲಿ ಗುರುತಿಸಲ್ಪಡಲು ಅಥವಾ ಅಂಗೀಕಾರ ಸಿಗಲು ಆಕೆ ದೇಹ ಮತ್ತು ವಯ್ಯಾರವನ್ನು ಅವಲಂಬಿಸಬೇಕಾಗಿಲ್ಲ. ಕಾರಣ, ಹಿಜಾಬ್ ಆಕೆಯನ್ನು ದೇವಭಕ್ತಿ, ಸದ್ಗುಣ, ಸಭ್ಯತೆ, ಬುದ್ಧಿಶಕ್ತಿ ಮುಂತಾದ ಉತ್ತಮ ಗುಣಗಳ ಕಡೆಗೆ ಒಯ್ದು ಆಕೆಯಲ್ಲಿ ಆತ್ಮಗೌರವ ಉಂಟುಮಾಡುತ್ತದೆ.

ಹಿಜಾಬ್ ಅಥವಾ ಬುರ್ಖಾ ಧರಿಸುವ ಪ್ರತಿ ಮಹಿಳೆಯೂ ಒಬ್ಬ ಅಪ್ಪಟ ವ್ಯಕ್ತಿ. ಆದ್ದರಿಂದ ಈ ಸಮಾನ ವಸ್ತ್ರಧಾರಣೆಯ ಆಧಾರದಲ್ಲಿ ಅವರೆಲ್ಲರ ಬಗ್ಗೆ ಒಂದೇ ರೀತಿಯಲ್ಲಿ ತೀರ್ಮಾನ ಕೈಗೊಳ್ಳುವುದು ಸರಿಯಲ್ಲ.

## ಹಿಜಾಬ್ ಬೈಬಲ್‌ನಲ್ಲಿ

ಹಿಜಾಬ್ ಹೊಸತಲ್ಲ. ಮುಸ್ಲಿಂ ಮಹಿಳೆಯರು ಯೇಸುವಿನ ತಾಯಿ ಮೇರಿ ಮುಂತಾದ ಗತಕಾಲದ

ಪತಿವೃತೆಯರ ಮಾದರಿಯನ್ನು ಹಿಂಬಾಲಿಸುತ್ತಿದ್ದಾರೆ. ಬೈಬಲ್‌ನಲ್ಲಿರುವ ಪುರಾವೆಗಳ ಪೈಕಿ ಈ ಎರಡು ವಚ-ನಗಳನ್ನು ನೋಡಿರಿ:

“ಸ್ತ್ರೀಯು ಪ್ರಾರ್ಥಿಸುವಾಗ ಅಥವಾ ಪ್ರವಾದಿಸುವಾಗ ತನ್ನ ತಲೆಗೆ ಮುಸುಕನ್ನು ಹಾಕಿಕೊಂಡಿರಬೇಕು. ಆಕೆ ಮುಸುಕು ಹಾಕಿಲ್ಲದಿದ್ದರೆ ಅದು ಅಪಮಾನಕರವಾಗಿ-ದೆ.” 1 ಕೊರಿಂಥದವರಿಗೆ 11:3-6.

“ಸ್ತ್ರೀಯರು ಯೋಗ್ಯವಾದ ಉಡುಪುಗಳನ್ನು ಧರಿಸಬೇ-ಕೆಂಬುದು ನನ್ನ ಆಸೆ. ಅವರ ಉಡುಪುಗಳು ಅವರು ಮಾನಸ್ಥೆಯರು ಎಂಬುದನ್ನು ತೋರಿಸಬೇಕು. ಸೌಂದ-ರ್ಯವನ್ನು ಹೆಚ್ಚಿಸಲು ತಲೆಗೂದಲು ಆಲಂಕಾರಿಕವಾಗಿ ಕಟ್ಟಿಕೊಳ್ಳಬಾರದು. ಬಂಗಾರ ಮುತ್ತುಗಳನ್ನು ತೊಡ-ಬಾರದು. ಬೆಲೆಬಾಳುವ ಬಟ್ಟೆಗಳನ್ನು ಧರಿಸಬಾರದು. ಆದರೆ ಯೋಗ್ಯಕಾರ್ಯಗಳು ಮತ್ತು ಆರಾಧನೆಗಳ ಮೂಲಕ ತಮ್ಮನ್ನು ಅಲಂಕರಿಸಿಕೊಳ್ಳಬೇಕು.” 1 ತಿ-

ಮೋಥಿಯನಿಗೆ 2:9-10.

## ಹಿಜಾಬ್ ಆತ್ಮವಿಶ್ವಾಸವಾಗಿದೆ

ಮಹಿಳೆಯರಿಗೆ ಆತ್ಮವಿಶ್ವಾಸ ಲಭ್ಯವಾಗಲು ಹಿಜಾಬ್ ಶಕ್ತಿ ನೀಡುತ್ತದೆ. ಜೀವನದ ನಿಜವಾದ ಉದ್ದೇಶದತ್ತ ಗಮನ ಕೇಂದ್ರೀಕರಿಸಲು ಅನುವು ಮಾಡಿಕೊಡುವ ಮೂಲಕ ಅದು ಮಹಿಳೆಯರಲ್ಲಿ ಆತ್ಮಗೌರವನ್ನು ಹೆಚ್ಚಿಸುತ್ತದೆ. ದೈಹಿಕ ರೂಪದ ಬಗ್ಗೆ ನಿರಂತರ ಯೋಚಿಸುವುದರಿಂದ ಅಪಾಯಕಾರಿ ಮತ್ತು ಅನಾರೋಗ್ಯಕಾರಿ ಪರಿಣಾಮಗಳುಂಟಾಗಬಹುದು. ಅತಿಯಾಗಿ ಬೇಡುವ ಸಮಾಜವನ್ನು ತೃಪ್ತಿಪಡಿಸಲು ಕೆಲವು ಮಹಿಳೆಯರು ಸೌಂದರ್ಯದ ಪರಾಕಾಷ್ಠೆಗೆ ತಲುಪುವುದಿದೆ. ರೂಪದ ಆಧಾರದಲ್ಲಿರುವ ಸ್ವಪ್ರಜ್ಞೆಗೆ ಮಿತಿ ಕಲ್ಪಿಸುವ ಮೂಲಕ ಆತ್ಮವಿಶ್ವಾಸದ ಕೊರತೆಯಿಂದ ಉಂಟಾಗುವ ಇಂತಹ ಮಾನಸಿಕ ಮತ್ತು ದೈಹಿಕ ಹಾನಿಗಳನ್ನು ಹಿಜಾಬ್ ತಡೆಗಟ್ಟುತ್ತದೆ.

## ಹಿಜಾಬ್ ಅಲ್ಲ

- ✓ ಸಮಾಜಕ್ಕೆ ಕೊಡುಗೆ ಸಲ್ಲಿಸುವುದನ್ನು ಹಿಜಾಬ್ ತಡೆಯುವುದಿಲ್ಲ.
- ✓ ಹಿಜಾಬ್ ದಬ್ಬಾಳಿಕೆಯ ಸಂಕೇತವಲ್ಲ.
- ✓ ಮಹಿಳೆಯರು ಮಾತ್ರವಿರುವ ಮತ್ತು ನಿರ್ದಿಷ್ಟ ಸಂ-ಬಂಧಿಕರಾದ ಗಂಡಸರಿರುವ ಸ್ಥಳದಲ್ಲಿ ಹಿಜಾಬ್ ಧರಿಸಬೇಕಾದ ಅಗತ್ಯವಿಲ್ಲ.
- ✓ ಹಿಜಾಬ್ ಮಹಿಳೆಯರು ಪುರುಷರಿಗಿಂತ ಕೀಳು ಎನ್ನುವುದರ ದ್ಯೋತಕವಲ್ಲ.
- ✓ ಮಹಿಳೆಯರು ತಮ್ಮ ಅನಿಸಿಕೆ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದನ್ನು ಹಿಜಾಬ್ ನಿರ್ಬಂಧಿಸುವುದಿಲ್ಲ.
- ✓ ಮಹಿಳೆಯರು ವಿದ್ಯೆ ಅಥವಾ ಯೋಗ್ಯ ವೃತ್ತಿ ಪಡೆ-ಯುವುದನ್ನು ಹಿಜಾಬ್ ನಿರ್ಬಂಧಿಸುವುದಿಲ್ಲ.
- ✓ ಹಿಜಾಬ್ ಚಲಿಸುವ ಬಂಧೀಖಾನೆಯಲ್ಲ.
- ✓ ಹಿಜಾಬ್ ಮುಸ್ಲಿಮೇತರರನ್ನು ನಿರ್ಲಕ್ಷಿಸುವುದಕ್ಕೋ,

ಕೆರಳಿಸುವುದಕ್ಕೋ, ಅವರ ವಿರುದ್ಧ ಪ್ರತಿಭಟಿಸುವು-ದಕ್ಕೋ ಇರುವ ಸಂಕೇತವಲ್ಲ.

- ✓ ಹಿಜಾಬ್ ಹೊಸತಲ್ಲ. ಅನೇಕ ಸಾತ್ವಿಕ ಮಹಿಳೆಯರು ಪರ್ದಾ ಪದ್ಧತಿ ಪಾಲಿಸುತ್ತಿದ್ದರೆಂದು ಇತಿಹಾಸದಿಂದ ರುಜುವಾತಾಗಿದೆ.
- ✓ ಅದು ಸಾಮುದಾಯಿಕ ಮೌಲ್ಯಗಳಿಗೆ ವಿರುದ್ಧವಲ್ಲ. ಜನರು ಧರಿಸುವ ಬಟ್ಟೆಯಿಂದ ಅವರನ್ನು ಅಳೆ-ಯಬಾರದು, ಅವರ ರೂಪ ಅಥವಾ ಉಡುಗೆಯ ಆಧಾರದಲ್ಲಿ ಬೇಧ ಕಲ್ಪಿಸಬಾರದು ಅಥವಾ ಕೆಟ್ಟ-ದಾಗಿ ವರ್ತಿಸಬಾರದು ಮುಂತಾದವುಗಳನ್ನು ಸಾ-ಮುದಾಯಿಕ ಮೌಲ್ಯಗಳು ಆವಶ್ಯಪಡುತ್ತವೆ.
- ✓ ಅದು ಬೆದರಿಕೆಯ ಅಥವಾ ಸಮಾಜ ವಿರೋಧಿ ಕೃತ್ಯದ ಉದ್ದೇಶದಿಂದ ಧರಿಸುವ ಉಡುಪಲ್ಲ.

## ಹಿಜಾಬ್ ಬಗ್ಗೆ ಮುಸ್ಲಿಂ ಸ್ತ್ರೀಯರು ಏನೆನ್ನುತ್ತಾರೆ?

“ನಾನು 17ನೇ ವಯಸ್ಸಿನಲ್ಲಿ ಹಿಜಾಬ್ ಧರಿಸಲು ಆರಂಭಿಸಿದೆ. ಅದಕ್ಕಿಂತಲೂ ಮೊದಲು ಧರಿಸದೆ ಇರುವುದಕ್ಕೆ ನಾನೀಗ ವಿಷಾದಪಡುತ್ತಿದ್ದೇನೆ.” **ಫಾತಿನ್, 27**

“ಹಿಜಾಬ್ ಧರಿಸಲು ಸಿದ್ಧಳಾಗುವುದು ಮುಖ್ಯವಲ್ಲ. ಅದನ್ನು ಧರಿಸುವ ಭಾಗ್ಯ ಸಿಗುವುದೇ ಮುಖ್ಯ.” **ಮದೀನ, 22**

“ಹಿಜಾಬ್ ನನ್ನ ಸ್ವಾತಂತ್ರ್ಯ ಮತ್ತು ಆಯ್ಕೆಯನ್ನು ಪ್ರತಿನಿಧಿಸುತ್ತದೆ. ಅದು ಪುರುಷರು ಮತ್ತು ಮಾಧ್ಯಮಗಳು ಹೇಳುವಂತೆ ನನ್ನ ದಬ್ಬಾಳಿಕೆಯನ್ನು ಪ್ರತಿನಿಧಿಸುವುದಿಲ್ಲ.” **ನುಸೈಬ, 45**

“ನಾನು ಹಿಜಾಬ್ ಧರಿಸಲು ಇಷ್ಟಪಡುತ್ತೇನೆ. ಕಾರಣ, ನಾನು ಅದನ್ನು ಧರಿಸುವುದು ಅಲ್ಲಾಹನಿಗಾಗಿ. ನಾನು ಅದರ ಬಗ್ಗೆ ಯೋಚಿಸುವಾಗಲೆಲ್ಲ ಅದು ನನ್ನ ಮುಖದ-

ಲ್ಲಿ ಮಂದಹಾಸ ತರುತ್ತದೆ." **ಕು. ಆಯಿಶಾ, 13**

"ನನ್ನ ಗುರಿಗಳನ್ನು ಅರ್ಥ ಮಾಡಿಕೊಳ್ಳಲು ಮತ್ತು ಪುರುಷರ ವಕ್ರ ನೋಟಗಳ ಬಗ್ಗೆ ಚಿಂತಿಸದೆ ನಿಶ್ಚಿಂತವಾಗಿ ಶಾಲೆಗೆ ಹೋಗಲು ಅದು ನನಗೆ ಸಹಾಯ ಮಾಡುತ್ತ-ದೆ. ನನ್ನ ಬಗ್ಗೆ ನನ್ನ ರೂಪದ ಆಧಾರದಲ್ಲಿ ನಿರ್ಧರಿಸದೆ, ನನ್ನ ಆಲೋಚನೆ ಮತ್ತು ನನ್ನ ಸ್ವಭಾವದ ಆಧಾರದಲ್ಲಿ ನಿರ್ಧರಿಸುವಂತೆ ಅದು ಜನರನ್ನು ನಿರ್ಬಂಧಿಸುತ್ತದೆ." **ಕು. ಫ್ಲೇವಿಯಾ, 22**

"ನನ್ನ ದೇಹ ನನಗೆ ಸಂಬಂಧಿಸಿದ್ದು. ನಾನು ಏನು ಧರಿ-ಸುತ್ತೇನೋ ಅದರ ಬಗ್ಗೆ ಇನ್ನೊಬ್ಬರ ಮುಂದೆ ಸಮರ್ಥಿ-ಸಿಕೊಳ್ಳಬೇಕಾದ ಅಗತ್ಯ ನನಗಿಲ್ಲ. ಅದು ನನ್ನ ಧರ್ಮದ ಒಂದು ಭಾಗ. ನಾನು ಅದನ್ನು ಧರಿಸುತ್ತೇನೆ ಎಂಬ ಮಾ-ತ್ರಕ್ಕೆ ನಾನೇನು ಮನುಷ್ಯಜೀವಿಗಿಂತ ಕೆಳಗಿನವಳಾಗುವು-ದಿಲ್ಲ." **ಕು. ಯಾಸ್ಮೀನ್ , 21**

# ಸಮಾಪ್ತಿ

ಹಿಜಾಬ್ ಸೃಷ್ಟಿಕರ್ತನ ಆಜ್ಞಾಪಾಲನೆಯಾಗಿದೆ. ಅದು ಆತ್ಮಶಕ್ತಿ ಮತ್ತು ಘನತೆಯ ಮೂಲವಾಗಿದೆ. ಜಗತ್ತಿನ ಮುಕ್ಕುಮೂಲೆಗಳಲ್ಲಿರುವ ಕೋಟ್ಯಂತರ ಮಹಿಳೆಯ-ರು ತಮ್ಮ ವಿಶ್ವಾಸದ ಒಂದು ಭಾಗವಾಗಿ ಹಿಜಾಬ್ ಧರಿ-ಸುತ್ತಾರೆ. ಹಿಜಾಬ್ ದಬ್ಬಾಳಿಕೆಯಲ್ಲ. ಅದು ವಿಮೋಚನೆ, ಪರಿಶುದ್ಧಿ ಮತ್ತು ಮುಖ್ಯವಾಗಿ ವಿಶ್ವಾಸದ ಸಂಕೇತ. ಮಹಿಳೆಯನ್ನು ಗೌರವಿಸುವುದು ಇಸ್ಲಾಮೀ ಬೋಧ-ನೆಗಳ ಒಂದು ಗಮನಾರ್ಹ ಅಂಶವಾಗಿದೆ. ಹಿಜಾಬ್ ಅದನ್ನು ವ್ಯಕ್ತಪಡಿಸುತ್ತದೆ.

ಸಮಾಜದಲ್ಲಿ ಬೆಲೆ ಸಿಗಲು ಮಹಿಳೆಯರು ಸ್ವಯಂ ಪ್ರ-ದರ್ಶನ ಮಾಡಬೇಕಾದ ಅಗತ್ಯವಿಲ್ಲದಾಗುವಾಗ ಮತ್ತು ತಮ್ಮ ದೇಹ ಎಲ್ಲರಿಗೂ ಆಸ್ವಾದಿಸುವುದಕ್ಕೆ ಇರುವುದಲ್ಲ ಎಂಬ ನಿಲುವನ್ನು ಕಾಪಾಡಿಕೊಳ್ಳಲು ಹೋರಾಟ ಮಾ-

ಡಬೇಕಾದ ಅಗತ್ಯವಿಲ್ಲದಾಗುವಾಗ ನಿಜವಾದ ಸಮಾನ-
ತೆಯು ಉಂಟಾಗುತ್ತದೆ.